

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1122 |
| ಸದಸ್ಯರ ಹೆಸರು | ಡಾ. ಚಂದ್ರಶೇಖರ್ ಬಿ. ಪಾಟೀಲ್<br>(ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕಲಬುರಗಿ, ಬೀದರ್ ಮತ್ತು ಯಾದಗಿರಿ ಜಿಲ್ಲೆಯಲ್ಲಿ ಇಲ್ಲಿಯವರೆಗೆ ಅಕ್ರಮ ಮರಳು ಸಾಗಣೆ ಸಂಬಂಧ ದಾಖಲಾದ ಕೇಸ್ ಗಳು ಎಷ್ಟು; | ಕಲಬುರಗಿ, ಬೀದರ್ ಮತ್ತು ಯಾದಗಿರಿ ಜಿಲ್ಲಾ ವ್ಯಾಪ್ತಿಯಲ್ಲಿ ಕಳೆದ 03 ವರ್ಷಗಳಲ್ಲಿ ಅನಧಿಕೃತ ಮರಳು ಗಣಿಗಾರಿಕೆ, ಸಾಗಾಣಿಕೆ ಮತ್ತು ದಾಸ್ತಾನಿನಡಿ ಸಂಗ್ರಹಿಸಲಾದ ದಂಡದ ಮೊತ್ತ ಹಾಗೂ ದಾಖಲಿಸಲಾದ ಮೊಕದ್ದಮೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ. | ಕಲಬುರಗಿ ಜಿಲ್ಲೆಯಲ್ಲಿ ಅಕ್ರಮ ಮರಳು ಸಾಗಣೆ ವೇಳೆ ವಶಕ್ಕೆ ಪಡೆದ ಮರಳಿನ ಮೌಲ್ಯ ಎಷ್ಟು; | ಕಲಬುರಗಿ ಜಿಲ್ಲಾ ಮರಳು ಉಸ್ತುವಾರಿ ಸಮಿತಿಯು ಪ್ರತಿ ಮೆಟ್ರಿಕ್ ಟನ್ ಮರಳಿಗೆ ನಿಗದಿಪಡಿಸಿರುವ ರೂ. 696/- ಗಳ ಮಾರಾಟದ ದರದಂತೆ ಕಳೆದ 03 ವರ್ಷಗಳಲ್ಲಿ ವಶಕ್ಕೆ ಪಡೆದ 4,115.02 ಮೆಟ್ರಿಕ್ ಟನ್ ಮರಳಿನ ಅಂದಾಜು ಮೌಲ್ಯವು ರೂ. 28,64,053.00 ಆಗುತ್ತದೆ. |
| ಇ. | ಅಕ್ರಮ ಮರಳು ದಂಧೆ ತಡೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ರಾಜ್ಯದಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ:<br>• ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಗಳನ್ನು ರಚಿಸಲಾಗಿರುತ್ತದೆ.<br>• ಮೇಲ್ಕಂಡ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ. |

| | | |
|---|---|---|
| | | • ಸದರಿ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಯಲು ಗಣಿ ಮತ್ತು ಖನಿಜ(ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 4(1), 4(1-A), 21 ಮತ್ತು 22 ರಡಿಯಲ್ಲಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಗಳು, 2016ರ ನಿಯಮ 31-Rರ ಉಪ ನಿಯಮ 13 ರಡಿ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ದಾಖಲಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಮರಳು ಉಸ್ತುವಾರಿ ಸಮಿತಿಗಳಿಂದ ರಾಜ್ಯದಲ್ಲಿ ಆಯಾಕಟ್ಟಿನ ಪ್ರದೇಶಗಳಲ್ಲಿ ಮರಳು ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ.<br>• ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಮರಳು ಗಣಿಗಾರಿಕೆ/ ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.<br>• ದಿನಾಂಕ 30.06.2020 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರ ನಿಯಮ 43 ಕ್ಕೆ ತಿದ್ದುಪಡಿ ತಂದು, ಅನಧಿಕೃತ ಮರಳು ಹಾಗೂ ಇತರೆ ಉಪಖನಿಜಗಳ ಸಾಗಾಣಿಕೆಗೆ ಹೆಚ್ಚಿನ ದಂಡವನ್ನು ವಿಧಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಮುಂದುವರೆದು, ಅನಧಿಕೃತ ಮರಳು / ಇತರ ಖನಿಜಗಳ ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಪ್ರತಿ ಜಿಲ್ಲೆಯಲ್ಲಿ ಖನಿಜ ಸಂರಕ್ಷಣೆ ಪಡೆ ಸ್ಥಾಪಿಸಲು ಕ್ರಮ ವಹಿಸಲಾಗಿದೆ.<br>• ಅದರಂತೆ, ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಮರಳು ಗಣಿಗಾರಿಕೆ, ಸಾಗಾಣಿಕೆ ಮತ್ತು ದಾಸ್ತಾನಿನಡಿ ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ, ಸಂಗ್ರಹಿಸಲಾದ ದಂಡದ ಮೊತ್ತ ಮತ್ತು ದಾಖಲಿಸಲಾದ ಮೊಕದ್ದಮೆಗಳ ವಿವರಗಳನ್ನು **ಅನುಬಂಧ- 2** ರಲ್ಲಿ ನೀಡಲಾಗಿದೆ. |

ಸಂಖ್ಯೆ ಸಿಐ 481 ಎಂಎಂಎನ್ 2021

Halappa BA

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ ಹಾಗೂ ಹಿರಿಯ ನಾಗರಿಕರ
ಸಬಲೀಕರಣ ಸಚಿವರು.

ಅನುಬಂಧ-1

## ಜಿಲ್ಲಾ ಮರಳು ಸಮಿತಿಯ ವಿವಿಧ ಇಲಾಖೆಗಳಿಂದ ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆ ತಡೆಗಟ್ಟಿ ದಂಡ ವಿಧಿಸಿರುವ ಮತ್ತು ಮೊಕದ್ದಮೆ ದಾಖಲಿಸಿರುವ ವಿವರಗಳು

2018-19 ರಿಂದ 2020-21 ರ ಅಂತ್ಯದವರೆಗೆ

| ಕ್ರ. ಸಂ. | ಜಿಲ್ಲೆ | 1. ಅನಧಿಕೃತ ಮರಳು ಗಣಿಗಾರಿಕೆ | | | | 2. ಅನಧಿಕೃತ ಸಾಧಾರಣ ಮರಳು ಸಾಗಾಣಿಕೆ | | | | 3. ಅನಧಿಕೃತ ಸಾಧಾರಣ ಮರಳು ದಾಸ್ತಾನು | | | |
|---|---|---|---|---|---|---|---|---|---|---|---|---|---|
| | | ಪತ್ತೆಹಚ್ಚಿದ ಪ್ರಕರಣಗಳ ಸಂಖ್ಯೆ | ವಿಧಿಸಿರುವ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | | ವಶಪಡಿಸಿಕೊಂಡ / ಪತ್ತೆಹಚ್ಚಿದ ವಾಹನಗಳ ಸಂಖ್ಯೆ | ವಿಧಿಸಿರುವ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | | ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ | ವಿಧಿಸಿರುವ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | |
| | | | | FIR No. | PCR / CC No. | | | FIR No. | PCR / CC No. | | | FIR No. | PCR / CC No. |
| 1 | 2 | 3 | 5 | 6 | 7 | 8 | 10 | 11 | 12 | 13 | 15 | 16 | 17 |
| **2018–19** | | | | | | | | | | | | | |
| 1 | ಕಲಬುರಗಿ | 2 | 3.00 | 1 | 0 | 296 | 85.00 | 293 | 3 | 72 | 129.04 | 72 | 4 |
| 2 | ಬೀದರ್ | 12 | 4.00 | 0 | 0 | 51 | 13 | 0 | 4 | 4 | 10.00 | 0 | 26 |
| 3 | ಯಾದಗಿರಿ | 0 | 0.00 | 0 | 0 | 231 | 0.36 | 225 | 0 | 0 | 0.00 | 0 | 0 |
| **2019–20** | | | | | | | | | | | | | |
| 1 | ಕಲಬುರಗಿ | 0 | 0.00 | 0 | 0 | 249 | 8.35 | 235 | 2 | 30 | 4.82 | 20 | 1 |
| 2 | ಬೀದರ್ | 16 | 3.59 | 0 | 0 | 82 | 19.95 | 0 | 0 | 1 | 0.55 | 0 | 0 |
| 3 | ಯಾದಗಿರಿ | 0 | 0.00 | 0 | 0 | 152 | 1.50 | 146 | 0 | 0 | 0.00 | 0 | 0 |
| **2021–22** | | | | | | | | | | | | | |
| 1 | ಕಲಬುರಗಿ | 3 | 5.90 | 0 | 0 | 188 | 23.19 | 143 | 0 | 46 | 7.75 | 44 | 0 |
| 2 | ಬೀದರ್ | 0 | 0.00 | 0 | 0 | 62 | 21.11 | 0 | 0 | 0 | 0.00 | 0 | 0 |
| 3 | ಯಾದಗಿರಿ | 0 | 0.00 | 0 | 0 | 119 | 8.00 | 108 | 0 | 3 | 0.00 | 3 | 0 |

Deputy Director (Min. Admn)
Dept. of Mines & Geology
Bangalore-560001

ಅನುಬಂಧ–2

ಕಳೆದ 3 ವರ್ಷಗಳಲ್ಲಿ ಅನಧಿಕೃತ ಮರಳು ಚಟುವಟಿಕೆ ವಿರುದ್ಧ ವಿಧಿಸಿದ ದಂಡ ಮತ್ತು ದಾಖಲಿಸಿರುವ ಮೊಕದ್ದಮೆಗಳ ವಿವರ

| 2018–19 | | | | |
|---|---|---|---|---|
| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
| 1 | ಅನಧಿಕೃತ ಮರಳು ಗಣಿಗಾರಿಕೆ | 191 | 54.62 | 106 |
| 2 | ಅನಧಿಕೃತ ಮರಳು ಸಾಗಾಣಿಕೆ | 3361 | 375.57 | 2584 |
| 3 | ಅನಧಿಕೃತ ಮರಳು ದಾಸ್ತಾನು | 284 | 479.29 | 176 |
| 4 | ಫಿಲ್ಟರ್ ಮರಳು | 33 | 0.90 | 27 |
| ಒಟ್ಟು | | **3869** | **910.38** | **2893** |
| 2019–20 | | | | |
| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
| 1 | ಅನಧಿಕೃತ ಮರಳು ಗಣಿಗಾರಿಕೆ | 240 | 128.81 | 106 |
| 2 | ಅನಧಿಕೃತ ಮರಳು ಸಾಗಾಣಿಕೆ | 2676 | 271.01 | 1866 |
| 3 | ಅನಧಿಕೃತ ಮರಳು ದಾಸ್ತಾನು | 271 | 52.75 | 113 |
| 4 | ಫಿಲ್ಟರ್ ಮರಳು | 6 | 0.00 | 5 |
| ಒಟ್ಟು | | **3193** | **452.57** | **2090** |
| 2020–21 | | | | |
| ಕ್ರ. ಸಂ. | ಪ್ರಕರಣಗಳ ವಿವರ | ಪ್ರಕರಣಗಳ ಸಂಖ್ಯೆ | ದಂಡ (ರೂ. ಲಕ್ಷಗಳಲ್ಲಿ) | ದಾಖಲಿಸಿದ ಎಫ್.ಐ.ಆರ್. |
| 1 | ಅನಧಿಕೃತ ಮರಳು ಗಣಿಗಾರಿಕೆ | 293 | 82.55 | 72 |
| 2 | ಅನಧಿಕೃತ ಮರಳು ಸಾಗಾಣಿಕೆ | 2866 | 506.41 | 929 |
| 3 | ಅನಧಿಕೃತ ಮರಳು ದಾಸ್ತಾನು | 287 | 135.85 | 127 |
| 4 | ಫಿಲ್ಟರ್ ಮರಳು | 5 | 0.00 | 5 |
| ಒಟ್ಟು | | **3451** | **724.81** | **1133** |

CI-489-MMN-2021

Deputy Director (Min. Admn)
Dept. of Mines & Geology
Bangalore-560001